# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 841 |
| ವಿಧಾನ ಪರಿಷತ್ತು ಸದಸ್ಯರ ಹೆಸರು | : | ಶ್ರೀ ಪಿ. ಆರ್. ರಮೇಶ್(ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | : | 09.03.2021 |
| ಉತ್ತರಿಸುವ ಸಚಿವರು | : | ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು. |

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ರಾಜ್ಯದಲ್ಲಿ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆವತಿಯಿಂದ ವಿತರಿಸಲಾಗಿರುವ ಬಿಪಿಎಲ್ ಪಡಿತರ ಚೀಟಿಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು/ತಾಲ್ಲೂಕುವಾರು/ಗ್ರಾಮವಾರು ವಿವರ ನೀಡುವುದು)</td><td>01.03.2021ರಲ್ಲಿದ್ದಂತೆ ರಾಜ್ಯದಲ್ಲಿ ಈ ಕೆಳಕಂಡಂತೆ ಬಿ.ಪಿ.ಎಲ್ (ಅಂತ್ಯೋದಯ ಅನ್ನ ಮತ್ತು ಆದ್ಯತಾ) ಪಡಿತರ ಚೀಟಿಗಳು ಚಾಲ್ತಿಯಲ್ಲಿರುತ್ತದೆ.<br><br>
<table>
<tr><th>ಅಂತ್ಯೋದಯ ಅನ್ನ ಪಡಿತರ ಚೀಟಿಗಳು</th><th>ಆದ್ಯತಾ ಪಡಿತರ ಚೀಟಿಗಳು</th><th>ಒಟ್ಟು ಪಡಿತರ ಚೀಟಿಗಳು</th></tr>
<tr><td>1090951</td><td>11683545</td><td>12774496</td></tr>
</table>
<br>(ಜಿಲ್ಲಾವಾರು/ ತಾಲ್ಲೂಕುವಾರು/ ಗ್ರಾಮವಾರು ವಿವರಗಳ ಮಾಹಿತಿಯನ್ನು ಸಿ.ಡಿ ಯ ಮುಖಾಂತರ ಒದಗಿಸಲಾಗಿದೆ.</td></tr>
<tr><td>ಆ</td><td>ಬಿಪಿಎಲ್ ಪಡಿತರ ಚೀಟಿಗಳನ್ನು ಹೊಂದಿರುವ ಕುಟುಂಬಗಳಿಗೆ ಸರ್ಕಾರದಿಂದ ನೀಡುವ ಪಡಿತರ ಮತ್ತು ಅವರ ದರಗಳ ವಿವರಗಳನ್ನು ನೀಡುವುದು ಈ ಪಡಿತರದ ದರಗಳನ್ನು ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; (ವಿವರ ನೀಡುವುದು)</td><td>ಆದ್ಯತಾ ಪಡಿತರ ಚೀಟಿಗಳಿಗೆ ಪ್ರತಿ ಮಾಹೆ ಪ್ರತಿ ಸದಸ್ಯರಿಗೆ 5 ಕೆ.ಜಿ ಅಕ್ಕಿ ಹಾಗೂ ಪ್ರತಿ ಪಡಿತರ ಚೀಟಿಗೆ 2 ಕೆ.ಜಿ ಗೋಧಿ ಮತ್ತು ಅಂತ್ಯೋದಯ ಅನ್ನ ಪಡಿತರ ಚೀಟಿದಾರರಿಗೆ ಪ್ರತಿ ಪಡಿತರ ಚೀಟಿಗೆ 35 ಕೆ.ಜಿ ಅಕ್ಕಿ ಉಚಿತವಾಗಿ ವಿತರಿಸಲಾಗುತ್ತಿದೆ.</td></tr>
<tr><td>ಇ</td><td>ಬಿಪಿಎಲ್ ಪಡಿತರ ಚೀಟಿ ಹೊಂದಲು ನಿಗಧಿಪಡಿಸಿರುವ ಮಾನದಂಡಗಳೇನು; (ವಿವರ ನೀಡುವುದು);</td><td>ಸರ್ಕಾರಿ ಆದೇಶ ಸಂ:ಆನಾಸ 116 ಡಿಆರ್‌ಎ 2015, ಬೆಂಗಳೂರು, ದಿನಾಂಕ:25.03.2017 ಮತ್ತು ಸರ್ಕಾರಿ ಆದೇಶ ಸಂ:ಆನಾಸ 116 ಡಿಆರ್‌ಎ 2015, ಬೆಂಗಳೂರು, ದಿನಾಂಕ:20.05.2017 ರಂತೆ ಕೆಳಕಂಡ ಹೊರಗಿಡುವಿಕೆ ಮಾನದಂಡಗಳ (Exclusion Criteria) ಆಧಾರದ ಮೇಲೆ ಆದ್ಯತಾ (BPL) ಪಡಿತರ ಚೀಟಿಗಳನ್ನು ವಿತರಿಸಲಾಗಿದೆ.<br><br>1)ವೇತನವನ್ನು ಗಣನೆಗೆ ತೆಗೆದುಕೊಳ್ಳದೆ ಎಲ್ಲಾ ಖಾಯಂ ನೌಕರರು ಅಂದರೆ, ಸರ್ಕಾರದ ಅಥವಾ ಸರ್ಕಾರದಿಂದ ಅನುದಾನವನ್ನು ಪಡೆಯುತ್ತಿರುವ ಸಂಸ್ಥೆಗಳು ಅಥವಾ ಸರ್ಕಾರಿ ಪ್ರಾಯೋಜಿತ, ಸರ್ಕಾರಿ ಸ್ವಾಮ್ಯದ ಸಂಸ್ಥೆಗಳು/ಮಂಡಳಿಗಳು /ನಿಗಮಗಳು/ಸ್ವಾಯತ್ತ ಸಂಸ್ಥೆಗಳು ಇತ್ಯಾದಿ: ಒಳಗೊಂಡಂತೆ ಆದಾಯ ತೆರಿಗೆ/ಸೇವಾ ತೆರಿಗೆ/ವ್ಯಾಟ್/ವೃತ್ತಿ ತೆರಿಗೆ ಪಾವತಿಸುವ ಎಲ್ಲಾ ಕುಟುಂಬಗಳು.<br><br>2. ಗ್ರಾಮೀಣ ಪ್ರದೇಶದಲ್ಲಿ 3 ಹೆಕ್ಟೇರ್ ಒಣಭೂಮಿ ಅಥವಾ</td></tr>
</table>

| | | |
|---|---|---|
| | | ತತ್ಸಮಾನ ನೀರಾವರಿ ಭೂಮಿ ಹೊಂದಿರುವ ಕುಟುಂಬಗಳು ಅಥವಾ ಗ್ರಾಮೀಣ ಪ್ರದೇಶವನ್ನು ಹೊರತುಪಡಿಸಿ ನಗರ ಪ್ರದೇಶಗಳಲ್ಲಿ 1000 ಚದರ ಅಡಿಗಿಂತಲೂ ಹೆಚ್ಚಿನ ವಿಸ್ತೀರ್ಣದ ಪಕ್ಕಾ ಮನೆಯನ್ನು ಸ್ವಂತವಾಗಿ ಹೊಂದಿರುವ ಕುಟುಂಬಗಳು.<br>3. ಜೀವನೋಪಾಯಕ್ಕಾಗಿ ಸ್ವತಃ ಓಡಿಸುವ ಒಂದು ವಾಣಿಜ್ಯ ವಾಹನವನ್ನು ಅಂದರೆ ಟ್ರಾಕ್ಟರ್, ಮ್ಯಾಕ್ಸಿಕ್ಯಾಬ್ ಟ್ಯಾಕ್ಸಿ ಇತ್ಯಾದಿಗಳನ್ನು ಹೊಂದಿದ ಕುಟುಂಬವನ್ನು ಹೊರತುಪಡಿಸಿ, ನಾಲ್ಕು ಚಕ್ರದ ವಾಹನಗಳನ್ನು ಹೊಂದಿರುವ ಎಲ್ಲಾ ಕುಟುಂಬಗಳು.<br>4. ಕುಟುಂಬದ ವಾರ್ಷಿಕ ಆದಾಯವು ರೂ.1.20 ಲಕ್ಷಗಳಿಗಿಂತ ಹೆಚ್ಚು ಇರುವ ಕುಟುಂಬಗಳು. |
| ಈ | ಆರ್ಥಿಕವಾಗಿ ಸದೃಢವಾಗಿರುವ ಕುಟುಂಬಗಳು ಸುಳ್ಳು ಮಾಹಿತಿ ನೀಡಿ ಬಿಪಿಎಲ್ ಪಡಿತರ ಚೀಟಿಗಳನ್ನು ಪಡೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರದ ಕ್ರಮವೇನು; (ವಿವರ ನೀಡುವುದು) | ಸರ್ಕಾರವು ಅನರ್ಹ ಬಿಪಿಎಲ್ ಪಡಿತರ ಚೀಟಿಗಳನ್ನು ನಿರಂತರವಾಗಿ ಪತ್ತೆ ಹಚ್ಚಿ ಅಂತಹ ಪಡಿತರ ಚೀಟಿಗಳನ್ನು ರದ್ದುಪಡಿಸಲಾಗುತ್ತಿದೆ. ರಾಜ್ಯದಲ್ಲಿ ಕಳೆದ ಮೂರು ವರ್ಷಗಳಿಂದ ಇದುವರೆಗೂ 2,28,188 ಆದ್ಯತಾ (ಬಿ.ಪಿ.ಎಲ್) ಅನರ್ಹ ಪಡಿತರ ಚೀಟಿಗಳನ್ನು ಪತ್ತೆ ಹಚ್ಚಿ ರದ್ದುಪಡಿಸಲಾಗಿದೆ ಹಾಗೂ ರೂ.3,07,36,170/- ದಂಡವನ್ನು ವಸೂಲಿ ಮಾಡಲಾಗಿದೆ. |
| ಉ | ಸುಳ್ಳು ಮಾಹಿತಿ ನೀಡಿ ಪಡಿತರ ಚೀಟಿ ಪಡೆದಿರುವ ಕುಟುಂಬಗಳನ್ನು ಪತ್ತೆ ಹಚ್ಚಲು ಸರ್ಕಾರದ ಕ್ರಮವೇನು? (ವಿವರ ನೀಡುವುದು) | ಮಾನದಂಡಗಳಿಗೆ ವಿರುದ್ಧವಾಗಿ ಆದ್ಯತಾ ಪಡಿತರ ಚೀಟಿ ಪಡೆದಿರುವವರನ್ನು ಪತ್ತೆ ಮಾಡಲು ಪ್ರತಿ ಪಡಿತರ ಚೀಟಿದಾರರಿಗೆ ಸಂಬಂಧಿಸಿದಂತೆ ಕೆಳಕಂಡ ಮಾಹಿತಿಗಳನ್ನು ಸಂಬಂಧಪಟ್ಟ ಇಲಾಖೆಗಳಿಂದ ಪಡೆದು ಪರಿಶೀಲಿಸಿ ಕ್ರಮವಹಿಸಲಾಗುತ್ತಿದೆ.<br>• ಖಜಾನೆ ಇಲಾಖೆಯಿಂದ ಸರ್ಕಾರಿ ನೌಕರರು/ ಕಾರ್ಖಾನೆ ನೌಕರರು/ ನಿವೃತ್ತ ನೌಕರರು ಹೊಂದಿರುವ ಆದ್ಯತಾ ಪಡಿತರ ಚೀಟಿಗಳನ್ನು ಪರಿಶೀಲಿಸಲು ಹೆಚ್.ಆರ್.ಎಂ.ಎಸ್. ದತ್ತಾಂಶ ತುಲನೆ ಮಾಡುವುದು ಅರೆ ಸರ್ಕಾರಿ ನೌಕರರು ಹೊಂದಿರುವ ಆದ್ಯತಾ ಪಡಿತರ ಚೀಟಿಗಳನ್ನು ಪರಿಶೀಲಿಸಲು ಸಂಬಂಧಿಸಿದ ನಿಗಮ ಮಂಡಳಿ/ ಕಾರ್ಖಾನೆಗಳಿಂದ ವಿವರ ಪಡೆದು ದತ್ತಾಂಶ ತುಲನೆ ಮಾಡುವುದು<br>• ಸಕ್ಕರೆ ಕಾರ್ಖಾನೆಗಳು ಹಾಗೂ ಇತರ ಖಾಸಗಿ ಕಾರ್ಖಾನೆಗಳಿಂದ ಕಾರ್ಖಾನೆ ನೌಕರರು ಹೊಂದಿರುವ ಆದ್ಯತಾ ಪಡಿತರ ಚೀಟಿಗಳನ್ನು ಪರಿಶೀಲಿಸಲು ಸಂಬಂಧಿಸಿದ ವಿವರ ಪಡೆದು ದತ್ತಾಂಶ ತುಲನೆ ಮಾಡುವುದು<br>• ಆದಾಯ ತೆರಿಗೆ ಮತ್ತು ವೃತ್ತಿ ತೆರಿಗೆ ಇಲಾಖೆಗಳಿಂದ ತೆರಿಗೆ ಪಾವತಿದಾರರ ವಿವರಗಳನ್ನು ಪಡೆದು ತುಲನೆ |

| | | |
|---|---|---|
| | | ಮಾಡುವುದು<br>• ನಗರಾಭಿವೃದ್ಧಿ ಮಂಡಳಿಗಳು/ ಪ್ರಾಧಿಕಾರಗಳು ಹಾಗೂ ನಗರಪಾಲಿಕೆ/ ನಗರಸಭೆ/ ಪುರಸಭೆ/ ಪಟ್ಟಣ ಪಂಚಾಯಿತಿಗಳಿಂದ ನಿವೇಶನ ಹಂಚಿಕೆ ಮತ್ತು ಆಸ್ತಿ ವಿವರಗಳನ್ನು ಪಡೆದು ತುಲನೆ ಮಾಡುವುದು<br>• ಕಂದಾಯ ಇಲಾಖೆಯಿಂದ ಭೂ ಹಿಡುವಳಿ ಮಾಹಿತಿಗಳನ್ನು ಪಡೆದು ತುಲನೆ ಮಾಡುವುದು<br>• ವಾಣಿಜ್ಯ ತೆರಿಗೆ ಇಲಾಖೆಯಿಂದ/ ಜಿ.ಎಸ್.ಟಿ ಅಧಿಕಾರಿಗಳಿಂದ ವ್ಯಾಪಾರಿ ಸಂಸ್ಥೆಗಳು/ವ್ಯಾಪಾರಸ್ಥರ ವಿವರಗಳನ್ನು ಪಡೆದು ತುಲನೆ ಮಾಡುವುದು<br>• ಕೃಷಿ ಮಾರುಕಟ್ಟೆ ಸಮಿತಿಗಳಿಂದ ನೋಂದಾಯಿತ ವ್ಯಾಪಾರಸ್ಥರ ವಿವರಗಳನ್ನು ಪಡೆದು ತುಲನೆ ಮಾಡುವುದು<br>• ಸಾರಿಗೆ ಇಲಾಖೆಯಿಂದ ಬಿಳಿ ಬಣ್ಣದ ಬೋರ್ಡಿನ ನಾಲ್ಕು ಚಕ್ರಗಳ ವಾಹನಗಳನ್ನು ಹೊಂದಿರುವವರ ದತ್ತಾಂಶ ಪಡೆದು ತುಲನೆ ಮಾಡುವುದು |

ಆನಾಸ 75 ಡಿಆರ್‌ಎ 2021 (ಇ-ಆಫೀಸ್)

(ಉಮೇಶ ವಿ.ಕತ್ತಿ)
ಆಹಾರ ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.